# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 65
ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 21-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆನ್‌ಲೈನ್ ಶಿಕ್ಷಣ ವ್ಯವಸ್ಥೆಯು ಕೋವಿಡ್ ಮಾರಿಯಿಂದ ಮಕ್ಕಳಿಗೆ ಅನಿವಾರ್ಯವಾಗಿರುವ ಹಿನ್ನೆಲೆಯಲ್ಲಿ ಆನ್‌ಲೈನ್ ಶಿಕ್ಷಣದಲ್ಲಿ ವೈಜ್ಞಾನಿಕ ಮಾಪನ ವ್ಯವಸ್ಥೆಯನ್ನು ಸರ್ಕಾರ ಯಾವ ರೀತಿ ಮಾಡಿದೆ ಅಥವಾ ಮಾಡುತ್ತದೆ; | 1. ಆನ್‌ಲೈನ್ ಶಿಕ್ಷಣಕ್ಕಾಗಿ ತಾಂತ್ರಿಕ ಪರಿಕರ ಹೊಂದಿದವರನ್ನು ಗುರುತಿಸಲು ಸರ್ವೇ ನಡೆಸಿ ಪಟ್ಟಿ ತಯಾರಿಸಲಾಗಿದೆ.<br>2. ವಿದ್ಯಾರ್ಥಿಗಳ ವಾಟ್ಸ್‌ಆಪ್ ಗುಂಪು ರಚನೆ ಮಾಡಲಾಗಿದೆ. ಅದರಲ್ಲಿ ಆನ್‌ಲೈನ್ ತರಗತಿಗಳ ವೇಳಾಪಟ್ಟಿ ವಿವರಗಳನ್ನು ಹಂಚಿ ವಿದ್ಯಾರ್ಥಿಗಳನ್ನು ಕಲಿಕೆಗೆ ಸಿದ್ಧಗೊಳಿಸಲಾಗಿದೆ.<br>3. ವೇಳಾಪಟ್ಟಿಯಂತೆ ಪಠ್ಯಬೋಧನೆಯನ್ನು ಕೈಗೊಳ್ಳಲಾಗುತ್ತಿದೆ. ಆ ಪಠ್ಯಕ್ಕೆ ಪೂರಕವಾದ ಅಂಶಗಳನ್ನು ಆಧರಿಸಿ ಪ್ರಶ್ನೆಗಳನ್ನು ವಿದ್ಯಾರ್ಥಿಗಳಿಗೆ ರವಾನಿಸಲಾಗುತ್ತಿದೆ. ಅವರು ಉತ್ತರಿಸಿದ ಕೂಡಲೇ ಶೀಘ್ರವಾಗಿ ಮೌಲ್ಯಮಾಪನಗೊಳಿಸಿ ಹಿಮ್ಮಾಹಿತಿ (Feedback) ನೀಡಲಾಗುತ್ತಿದೆ.<br>4. ಪಠ್ಯ ಬೋಧನೆ ಮತ್ತು ನಿರಂತರ ವಿಚಾರ ವಿನಿಮಯಕ್ಕೆ ವೆಬ್‌ನಾರ್‌ಗಳನ್ನು ಬಳಸಲಾಗುತ್ತಿದೆ. ಅದಕ್ಕೆ ಅಗತ್ಯವಾದ ವೆಬ್‌ಎಕ್ಸ್, ಗೂಗಲ್‌ಮೀಟ್ ಅಥವಾ ಮೈಕ್ರೋಸಾಫ್ಟ್ ಇತರೆ ಆಪ್ ಡೌನ್‌ಲೋಡ್ ಮಾಡಿಕೊಂಡಿದ್ದನ್ನು ಖಾತ್ರಿ ಮಾಡಿಕೊಂಡು ಲಿಂಕ್ ಕಳುಹಿಸಿ ಪಾಠ ಬೋಧನೆ ಮಾಡಲಾಗುತ್ತಿದೆ.<br>5. ಪ್ರತಿ ತರಗತಿಗಳ ನಂತರ ಪ್ರಶ್ನೋತ್ತರ ಮಾಲೆಗಳ ಮೂಲಕ ವಿದ್ಯಾರ್ಥಿಗಳ ಕಲಿಕಾ ಪ್ರಗತಿಯನ್ನು ಮೌಲ್ಯಮಾಪನಗೊಳಿಸಿ, ಹಿಮ್ಮಾಹಿತಿ ಒದಗಿಸಲಾಗುತ್ತದೆ. |
| ಆ) | ಆನ್‌ಲೈನ್ ಶಿಕ್ಷಣ ಬೋಧನೆಯನ್ನು ವೈಜ್ಞಾನಿಕವಾಗಿ ನೀಡಲು ಶಿಕ್ಷಕ/ಶಿಕ್ಷಕಿಯರಿಗೆ ತರಬೇತಿ ನೀಡುವ ವ್ಯವಸ್ಥೆಯನ್ನು ಸೃಜಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | 1. ಆನ್‌ಲೈನ್ ಶಿಕ್ಷಣ ಬೋಧನಾ ಸಾಮರ್ಥ್ಯಗಳ ಬಗ್ಗೆ ಶಿಕ್ಷಕರಿಗೆ ತರಬೇತಿ ನೀಡಲು ಸಂಪನ್ಮೂಲ ವ್ಯಕ್ತಿಗಳನ್ನು ಬ್ಲಾಕ್ ಹಂತದಲ್ಲಿ ಗುರುತಿಸಿ ಬಿ.ಆರ್.ಸಿ ಕೇಂದ್ರಗಳಲ್ಲಿ ಡಯಟ್‌ಗಳ(DIET) ನೇತೃತ್ವದಲ್ಲಿ ತರಬೇತಿಗೊಳಿಸಲಾಗಿದೆ.<br>2. ತಾಲ್ಲೂಕು ಮಟ್ಟದ ಸಂಪನ್ಮೂಲ ವ್ಯಕ್ತಿಗಳಿಗೆ ಜಿಲ್ಲಾ ಹಂತದಲ್ಲಿ ತರಬೇತಿ ನೀಡಲಾಗಿದೆ. ಜಿಲ್ಲಾ ಹಂತದ ಸಂಪನ್ಮೂಲ ವ್ಯಕ್ತಿಗಳಿಗೆ ವಿಭಾಗ ಮತ್ತು ರಾಜ್ಯ ಹಂತದಲ್ಲಿ ತರಬೇತಿ ನೀಡಲಾಗಿದೆ. ಈ ಕಾರ್ಯಗಳಿಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಮತ್ತು ಸಿಸ್ಲೆಪ್ ಸಂಸ್ಥೆಗಳು ಬೌದ್ಧಿಕ |

| | | |
|---|---|---|
| | | ಮತ್ತು ತಾಂತ್ರಿಕ ಮಾರ್ಗದರ್ಶನಗಳನ್ನು ಒದಗಿಸುತ್ತಿವೆ.<br>3. ವಿಷಯಗಳ ಪಿ.ಪಿ.ಟಿ ತಯಾರಿಕೆ, ಪ್ರಸ್ತುತಿಗಳ ಬಗ್ಗೆ ಶಿಕ್ಷಕರಿಗೆ ತರಬೇತಿ ನಿಡಲಾಗಿದೆ. ಜೊತೆಗೆ ಪೂರಕ ಸಾಹಿತ್ಯ ಸಿದ್ದಪಡಿಸಿ ಎಲ್ಲರಿಗೂ ವಾಟ್ಸ್‌ಆಪ್ ಮೂಲಕ ತಲುಪಿಸುವ ಬಗ್ಗೆ ತರಬೇತಿ ನೀಡಲಾಗಿದೆ.<br>4. 2016–17ನೇ ಸಾಲಿನಿಂದ ಇಲ್ಲಿಯವರೆಗೆ ತಂತ್ರಜ್ಞಾನ ಆಧಾರಿತ ಕಲಿಕಾ ಕಾರ್ಯಕ್ರಮ (TALP) ದಡಿಯಲ್ಲಿ ಒಟ್ಟು 27,770 ಸರ್ಕಾರಿ ಪ್ರೌಢ ಶಾಲಾ ಶಿಕ್ಷಕರುಗಳಿಗೆ ತಂತ್ರಜ್ಞಾನ ಆಧಾರಿತ ಬೋಧನಾ–ಕಲಿಕಾ ಕೌಶಲಗಳಲ್ಲಿ ಸಬಲತೆಯನ್ನು ಮೂಡಿಸಲಾಗಿರುತ್ತದೆ.<br>5. ಶಿಕ್ಷಕರುಗಳಿಗೆ ಆನ್‌ಲೈನ್ ಶಿಕ್ಷಣ ನೀಡುವ ಸಂಬಂಧ ಇತರ ತಾಂತ್ರಿಕ ಬಳಕೆಯ ಕೌಶಲಗಳ ಬಗ್ಗೆಯೂ ತರಬೇತಿ ಒದಗಿಸಲಾಗಿದೆ. ವಿವರ(ಅನುಬಂಧ–1ರಲ್ಲಿ) ಲಗತ್ತಿಸಿದೆ. |
| ಇ) | ಸಾಮೂಹಿಕ ಆನ್‌ಲೈನ್ ಶಿಕ್ಷಣ ವ್ಯವಸ್ಥೆಯನ್ನು ಇಂಟರ್ ಆಕ್ಟೀವ್(Inter active) ಮಾಡಲು ಇರುವ ತಾಂತ್ರಿಕ ತೊಡಕು ಅಥವಾ ಸವಾಲುಗಳನ್ನು ಎದುರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಕೋವಿಡ್–19ರ ಕಾರಣದಿಂದ ಶಾಲಾ–ಕಾಲೇಜು ತರಗತಿಗಳು ಇಲ್ಲವಾಗಿದ್ದು, ಸಾಮೂಹಿಕ ಆನ್‌ಲೈನ್ ಶಿಕ್ಷಣ ವ್ಯವಸ್ಥೆಯನ್ನು ಅಂತ:ಕ್ರಿಯಾಶೀಲ(Inter active) ಗೊಳಿಸಲು ಹಲವಾರು ತಾಂತ್ರಿಕ ತೊಡಕು/ಸವಾಲುಗಳನ್ನು ಎದುರಿಸುವ ಅನಿವಾರ್ಯತೆ ಸೃಷ್ಠಿಯಾಗಿದೆ.<br>1. ಬಹುತೇಕ ಸರ್ಕಾರಿ ಶಾಲಾ ವಿದ್ಯಾರ್ಥಿಗಳಲ್ಲಿ 4ಜಿ ಮೊಬೈಲ್‌ಗಳು, ಟ್ಯಾಬ್, ಲಾಪ್‌ಟಾಪ್, ಗಣಕಯಂತ್ರಗಳು ಮತ್ತು ದೂರದರ್ಶನಗಳ ಲಭ್ಯತೆಗಳಿಲ್ಲ.<br>2. ರಾಜ್ಯವು ಸುಮಾರು 400 ಚದುರ ಕಿ.ಮೀ ವ್ಯಾಪ್ತಿಯನ್ನು ಹೊಂದಿದ್ದು ಇದು ಭೌಗೋಳಿಕವಾಗಿ ವೈವಿದ್ಯಮಯತೆಯಿಂದ ಕೂಡಿದೆ. ಈ ಎಲ್ಲಾ ರೀತಿಯ ಪ್ರದೇಶಗಳಲ್ಲಿ ಒಂದೇ ತೆರನಾಗಿ ನೆಟ್‌ವರ್ಕ್ ಇರುವುದಿಲ್ಲ.<br>3. ಆನ್‌ಲೈನ್ ಶಿಕ್ಷಣಕ್ಕೆ ಅಗತ್ಯವಾದಂತಹ 4ಜಿ ಮೊಬೈಲ್ ಟ್ಯಾಬ್, ಲಾಪ್‌ಟಾಪ್, ಗಣಕಯಂತ್ರಗಳು ಮತ್ತು ದೂರದರ್ಶನಗಳನ್ನು ಒದಗಿಸುವ ಚೈತನ್ಯ ಬಹುತೇಕ ಪೋಷಕರಿಗೆ ಇಲ್ಲವಾಗಿದೆ.<br>4. ರಾಜ್ಯದ 1ರಿಂದ 12ನೇ ತರಗತಿಯ ಎಲ್ಲಾ ಸರ್ಕಾರಿ ಶಾಲಾ–ಕಾಲೇಜು ವಿದ್ಯಾರ್ಥಿಗಳಿಗೆ ವೈಯಕ್ತಿವಾಗಿ ಟಾಬ್ಲೆಟ್ ಅಥವಾ ಸ್ಮಾರ್ಟ್ ಪೋನ್ ಒದಗಿಸುವಷ್ಟು ಆರ್ಥಿಕ ಚೈತನ್ಯತೆ ಇಲಾಖೆಗೆ ಸವಾಲಾಗಿದೆ.<br>ಈ ಮೇಲ್ಕಂಡ ಎಲ್ಲಾ ತಾಂತ್ರಿಕ ಮತ್ತು ಆರ್ಥಿಕ ವಿದ್ಯಮಾನಗಳ ನಡುವೆಯೂ ಸಾಮೂಹಿಕ ಆನ್‌ಲೈನ್ ಶಿಕ್ಷಣವನ್ನು ಪರಿಣಾಮಕಾರಿಯಾಗಿ ಅಂತ:ಕ್ರಿಯಾಶೀಲ(Inter active) ಗೊಳಿಸಲು ಇಲಾಖೆಯು ಮುಂದಿನಂತೆ ಕ್ರಮವಹಿಸಿದೆ. |

| | | |
|---|---|---|
| | | • ಆನ್‌ಲೈನ್ ಶಿಕ್ಷಣಕ್ಕೆ ಅಗತ್ಯವಾದ ತಾಂತ್ರಿಕ ಪರಿಕರಗಳನ್ನು ಹೊಂದಿರುವ ವಿದ್ಯಾರ್ಥಿಗಳ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆ ಮೂಲಕ ತಾಂತ್ರಿಕ ಪರಿಕರಗಳನ್ನು ಹೊಂದಿರುವ ವಿದ್ಯಾರ್ಥಿಗಳೊಂದಿಗೆ ಸಮೀಪದ ವಿದ್ಯಾರ್ಥಿಗಳು ಜೊತೆಗೂಡಿಸಿ ಕಲಿಕೆಗೆ ಪ್ರೋತ್ಸಾಹಿಸಲಾಗಿದೆ.<br>• ಸಾಧ್ಯವಾದಲ್ಲಿ ತಾಂತ್ರಿಕ ಪರಿಕರಗಳನ್ನು ಅವರ ಮಕ್ಕಳಿಗೆ ಒದಗಿಸಲು ಪೋಷಕರಿಗೆ ಶೈಕ್ಷಣಿಕ ದೃಷ್ಟಿಯಿಂದ ವಿನಂತಿಸಿದೆ.<br>• ಗ್ರಾಮಪಂಚಾಯಿತಿಗಳನ್ನು ಅದರ ವ್ಯಾಪ್ತಿಯ ಶಾಲೆಗೆ ಒಂದು ದೊಡ್ಡ ಪರದೆ ಎಲ್.ಸಿ.ಡಿ ಪ್ರೊಜೆಕ್ಟರ್, ಗಣಕಯಂತ್ರ ಮತ್ತು ಅಂತರಜಾಲ ಸೌಲಭ್ಯ ಒದಗಿಸಲು ಕೋರಲಾಗಿದೆ.<br>• ಈ ಸಂಬಂಧ ಸಮಾಜ ಸೇವಕರು, ಸರ್ಕಾರೇತರ ಸಂಘ ಸಂಸ್ಥೆ(ಎನ್.ಜಿ.ಒ) ಗಳಿಂದ ತಾಂತ್ರಿಕ ಮತ್ತು ಬೌದ್ಧಿಕ ಸಹಾಯಗಳನ್ನು ಒದಗಿಸಲು ಸರ್ಕಾರ ವಿನಂತಿಸಿದೆ.<br>ಸಾಮೂಹಿಕ ಆನ್‌ಲೈನ್ ಶಿಕ್ಷಣದಲ್ಲಿನ ಎಲ್ಲಾ ಮಿತಿಗಳನ್ನು ಅರಿತ ಇಲಾಖೆಯು ಇದಕ್ಕೆ ಪರ್ಯಾಯವಾಗಿ **'ವಿದ್ಯಾಗಮ'** ಯೋಜನೆಯಡಿ ವಠಾರ ಶಾಲೆಗಳ ಮೂಲಕ ವಿದ್ಯಾರ್ಥಿಗಳು ಇರುವಲ್ಲಿಗೆ ಶಿಕ್ಷಕರು ಬೇಟಿ ನೀಡಿ ಕಲಿಕೆಯನ್ನು ಒದಗಿಸುವ ಕ್ರಮ ರೂಪಿಸಲಾಗಿದೆ ಮತ್ತು **'ಸಂವೇದನ'** ಕಾರ್ಯಕ್ರಮದಡಿಯಲ್ಲಿ ಚಂದನ ದೂರದರ್ಶನದ ಮೂಲಕ ಪಾಠಗಳನ್ನು ಬಿತ್ತರಿಸಲಾಗುತ್ತಿದೆ. |

ಸಂಖ್ಯೆ: ಇಪಿ 122 ಎಂ.ಹೆಚ್.ಟಿ 2020

S. Su

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

ಅನುಬಂಧ–1

*ತರಬೇತಿಕಾರ್ಯಕ್ರಮಗಳ ವರದಿ*

1. ಕಲ್ಬುರ್ಗಿ ವಿಭಾಗದ ಆರು ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನಲಿಕಲಿ ಶಿಕ್ಷಕರಿಗೆ 5 ದಿನಗಳ ತರಬೇತಿಯನ್ನು ದಿ. 11-04-2020 ರಿಂದ15-04-2020ರವರೆಗೂ ಆಯೋಜಿಸಲಾಗಿತ್ತು. ತರಬೇತಿ ಆರಂಭಕ್ಕೆ ಮುನ್ನ ಬೇಸಿಗೆ ರಜೆ ಪ್ರಾರಂಭವಾಗುತ್ತಿದ್ದಂತೆ ಶಿಕ್ಷಕರಿಗೆ ವಿಶೇಷವಾಗಿ ನಲಿಕಲಿ ಶಿಕ್ಷಕರಿಗೆ ತರಬೇತಿಯನ್ನು ನೀಡಲು ನಿಶ್ಚಯಿಸಲಾಯಿತು. ಈ ಸಲುವಾಗಿ ರಾಜ್ಯ ಸಂಪನ್ಮೂಲ ವ್ಯಕ್ತಿಗಳು ವಿಶೇಷವಾಗಿ ರಾಜ್ಯ ಯೋಜನಾ ನಿರ್ದೇಶನಾಲಯದ( SPD) ನಲಿಕಲಿ consultant ಶ್ರೀ ಬೆಳ್ಳಿ ಶೆಟ್ಟಿಯವರ ಮಾರ್ಗದರ್ಶನದಲ್ಲಿ ವಿಭಾಗ ಮಟ್ಟದ ಸಂಪನ್ಮೂಲ ವ್ಯಕ್ತಿಗಳಿಗೆ ವೆಬಿನಾರ್ ಮೂಲಕ ತರಬೇತಿಯನ್ನು ನೀಡಲಾಯಿತು. ಪ್ರತಿ ತಾಲೂಕಿನ ಹಿಂದೆ ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯನಿರ್ವಹಿಸಿದ ಜಿಲ್ಲಾ ರಾಜ್ಯ ಸಂಪನ್ಮೂಲ ವ್ಯಕ್ತಿಗಳಿಗೆ ಐದು ದಿನದ ತರಬೇತಿಯನ್ನು ನೀಡಲಾಯಿತು. ತದನಂತರ ಬ್ಲಾಕ್ ವಾರು ಅಜಿಂ ಪ್ರೇಂಜಿ ಸಂಸ್ಥೆಯ ನೆರವಿನಿಂದ MICROSOFT TEAM ಮೂಲಕ ತಾಲೂಕುವಾರು 300 ಶಿಕ್ಷಕರ ಒಂದು ತಂಡದಂತೆ batch making ಮತ್ತು WhatsApp GROUPಗಳನ್ನು ಮಾಡಿಕೊಂಡು ಏಕಕಾಲದಲ್ಲಿ ಎರಡು ಮೂರು ತಂಡಗಳನ್ನು ಸಿದ್ದಪಡಿಸಿಕೊಂಡು 922 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ 9067 ಕನ್ನಡ ನಲಿಕಲಿ ಶಿಕ್ಷಕರಿಗೆ ಮತ್ತು 293 ಉರ್ದು ಶಾಲೆಯ ಶಿಕ್ಷಕರಿಗೆ ತರಬೇತಿಯನ್ನು 48 ತಂಡಗಳಲ್ಲಿ ನೀಡಲಾಯಿತು.

2. ಎರಡನೇ ಹಂತದಲ್ಲಿ ಸರ್ಕಾರಿ ಪ್ರೌಢಶಾಲೆ ಮುಖ್ಯ ಶಿಕ್ಷಕರಿಗೆ ಸಿ.ಟಿ.ಇ ನೇತೃತ್ವದಲ್ಲಿ ವಿಭಾಗದ ತರಬೇತಿಯನ್ನು ನೀಡಲು ನಿಶ್ಚತಿಸಲಾಯಿತು. ಮತ್ತು ಆಯುಕ್ತಾಲಯದ ಅಧಿಕಾರಿಗಳು ಮತ್ತು ಅರ್ಹ ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ 18-05-2020 ರಿಂದ ದಿನಗಳ ಆಡಳಿತಾತ್ಮಕ ಮತ್ತು ಶೈಕ್ಷಣಿಕವಾಗಿ 6 ತಂಡಗಳಲ್ಲಿ 6 ದಿನಗಳಲ್ಲಿ 1044 ಮುಖ್ಯ ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.

3. *ಮುಖ್ಯ ಶಿಕ್ಷಕರ ತರಬೇತಿ*:- ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರಿಗೆ 26-5-2020ರಿಂದ 30-5-2020ರವರೆಗೂ 5 ದಿನಗಳ ತರಬೇತಿಯನ್ನು ನೀಡಲಾಗಿರುತ್ತದೆ. 990 ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡುವ ಮೂಲಕ 5432 ಶಿಕ್ಷಕರಿಗೆ ತರಬೇತಿಯನ್ನು ಎ.ಪಿ.ಎಫ್ ನವರ MICROSOFT TEAM ಬಳಕೆಯಿಂದ ನೀಡಲಾಗಿರುತ್ತದೆ.

4. *ನಲಿಕಲಿ ಇಂಗ್ಲಿಷ್ ತರಬೇತಿ*: ENK ತರಬೇತಿ ಪಡೆದ ರಾಜ್ಯ ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ ತಾಲೂಕು ಹಂತದ ಶಿಕ್ಷಕರಿಗೆ ತರಬೇತಿ ನೀಡುವ 920 ಶಿಕ್ಷಕರನ್ನು ಸಂಪನ್ಮೂಲ ವ್ಯಕ್ತಿಗಳನ್ನಾಗಿ ಬಳಸಿಕೊಂಡು ತಾಲೂಕು ಹಂತದಲ್ಲಿ 3 ದಿನಗಳ ತರಬೇತಿಯನ್ನು 3-6-2020 ರಿಂದ 5-6-2020 ರವರೆಗೂ 8789 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಗಿರುತ್ತದೆ.

5. *CTE ಮತ್ತು DIET* ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 87 *ಉಪನ್ಯಾಸಕರು ಮತ್ತು ಹಿರಿಯ ಉಪನ್ಯಾಸಕರಿಗೆ* 6-7-2020 ರಿಂದ 8-7-2020 ರವರೆಗೂ 3 ದಿನಗಳ ತರಬೇತಿಯನ್ನು ಅರ್ಹ ಸಂಪನ್ಮೂಲ ವ್ಯಕ್ತಿಗಳ ತರಬೇತಿಯನ್ನು ನೀಡಲಾಗಿರುತ್ತದೆ.

6. *ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರಿಗೆ 10 ದಿನಗಳ ತರಬೇತಿ*: 6ರಿಂದ 8 ನೇ ತರಗತಿಗೆ ಕಲಿಸುವ GPT ಶಿಕ್ಷಕರಿಗೆ 10 ದಿನಗಳ ತರಬೇತಿಯನ್ನು ದಿ. 15.6.20 ರಿಂದ 24-6020 ರವರೆಗೂ ಹತ್ತು ದಿನಗಳ ತರಬೇತಿಯನ್ನು 56 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ ಹೊಸದಾಗಿ ನೇಮಕಗೊಂಡ 686 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.

7. *4 ಮತ್ತು 5 ನೇ ತರಗತಿಗಳಲ್ಲಿ ಕಾರ್ಯ ನಿರ್ವಹಿಸುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ* 10 ದಿನಗಳ ತರಬೇತಿ*:ಯನ್ನು ದಿ. 15.6.20 ರಿಂದ 20-6-020 ರವರೆಗೂ 6 ದಿನಗಳ ತರಬೇತಿಯನ್ನು 768 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ 10459 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.

8. *6 ಮತ್ತು 8 ನೇ ತರಗತಿಗಳಲ್ಲಿ ಕಾರ್ಯ ನಿರ್ವಹಿಸುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ* 6 ದಿನಗಳ ತರಬೇತಿಯನ್ನು ದಿ. 06.7.20 ರಿಂದ 31-7-20 ರವರೆಗೂ 6 ದಿನಗಳ ತರಬೇತಿಯನ್ನು 737 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ 3700 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.

9. 6 ಮತ್ತು 8 ನೇ ತರಗತಿಗಳಲ್ಲಿ ಇಂಗ್ಲಿಷ್, ಗಣಿತ ಮತ್ತು ಸಮಾಜ ವಿಜ್ಞಾನ ವಿಷಯಗಳನ್ನು ಬೋಧಿಸುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ 6 ದಿನಗಳ ತರಬೇತಿಯನ್ನು ದಿ. 13.7.20 ರಿಂದ 18-7-020 ರವರೆಗೂ ತರಬೇತಿಯನ್ನು 533 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ 9934 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.

10. *6 ಮತ್ತು 8 ನೇ ತರಗತಿಗಳಲ್ಲಿ ಕನ್ನಡ, ವಿಜ್ಞಾನ ಮತ್ತು ಹಿಂದಿ ವಿಷಯಗಳನ್ನು ಬೋಧಿಸುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ* 6 ದಿನಗಳ ತರಬೇತಿಯನ್ನು ದಿ. 20.7.20 ರಿಂದ 25-7-020 ರವರೆಗೂ 6 ದಿನಗಳ ತರಬೇತಿಯನ್ನು 608 ಸಂಪನ್ಮೂಲ ವ್ಯಕ್ತಿಗಳ ನೆರವಿನಿಂದ ಹೊಸದಾಗಿ ನೇಮಕಗೊಂಡ 9152 ಶಿಕ್ಷಕರಿಗೆ ತರಬೇತಿಯನ್ನು ನೀಡಲಾಯಿತು.